# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **292** |
| 2 | ಸದಸ್ಯರ ಹೆಸರು | ಶ್ರೀ ರಘುನಾಥ್‌ರಾವ್ ಮಲ್ಕಾಪೂರೆ (ವಿಧಾನಸಭೆಯಿಂದಚುನಾಯಿತರಾದವರು) |
| 3 | ಉತ್ತರಿಸಬೇಕಾದ ದಿನಾಂಕ | 04.03.2020 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಸರ್ವೆ ಕಾರ್ಯಗಳು ತುಂಬಾ ವಿಳಂಬವಾಗುತ್ತಿರುವುದರಿಂದ ರೈತರಿಗೆ ತೊಂದರೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | **ಸರ್ವೆ ಕಾರ್ಯಗಳು ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ.** ಬೀದರ್ ಜಿಲ್ಲೆಯಲ್ಲಿ ಪ್ರಸಕ್ತ ಸಾಲಿನಲ್ಲಿ ಮಾಹೆ ಏಪ್ರಿಲ್ 2019 ರಿಂದ ಜನವರಿ-2020ರ ಅಂತ್ಯದವರೆಗೆ) ಒಟ್ಟು 17173 ಅರ್ಜಿಗಳು ಅಳತೆಗಾಗಿ ಸ್ವೀಕೃತವಾಗಿವೆ, ಹಿಂದಿನ ಬಾಕಿ ಅರ್ಜಿಗಳು ಸೇರಿದಂತೆ ಒಟ್ಟು 19707 ಅರ್ಜಿಗಳನ್ನು ವಿಲೇಪಡಿಸಲಾಗಿದ್ದು. 11469 ಅರ್ಜಿಗಳು ಬಾಕಿ ಇರುತ್ತವೆ. ಬಾಕಿ ಅರ್ಜಿಗಳ 6853 ಅರ್ಜಿಗಳ ಪಹಣಿ ತಿದ್ದುಪಡಿ ಇತ್ಯಾದಿ ಕ್ರಮದ ಕುರಿತು ಕಂದಾಯ ಶಾಖೆಯಲ್ಲಿ ಬಾಕಿ ಇದ್ದು ಉಳಿದ 4616 ಅರ್ಜಿ ಅಳತೆ ಕುರಿತು ಭೂಮಾಪನ ಶಾಖೆಯಲ್ಲಿ ಬಾಕಿ ಇರುತ್ತದೆ. |

**ಬೀದರ್ ಜಿಲ್ಲೆಯ ಅಳತೆ ಪ್ರಕರಣಗಳ ತಾಲ್ಲೂಕುವಾರು ವಿವರ**

**(ಮಾಹೆ ಏಪ್ರಿಲ್ 2019 ರಿಂದ ಜನವರಿ-2020 ಅಂತ್ಯಕ್ಕೆ)**

| ತಾಲ್ಲೂಕು | ಆ.ಶಿಲ್ಕು | ಸ್ವೀಕೃತಿ | ಒಟ್ಟು | ವಿಲೇ | ಬಾಕಿ | ಕಂದಾಯ ಶಾಖೆಯಲ್ಲಿ ಬಾಕಿ | ಭೂಮಾಪನ ಶಾಖೆಯಲ್ಲಿ ಬಾಕಿ |
|---|---|---|---|---|---|---|---|
| ಬಸವಕಲ್ಯಾಣ | 1590 | 3070 | 4660 | 3545 | 1115 | 601 | 514 |
| ಭಾಲ್ಕಿ | 4025 | 3811 | 7836 | 4858 | 2978 | 1678 | 1300 |
| ಔರಾದ್ | 2017 | 1444 | 3461 | 1691 | 1770 | 1254 | 516 |
| ಬೀದರ್ | 3401 | 3704 | 7105 | 4029 | 3076 | 1833 | 1243 |
| ಹುಮ್ನಾಬಾದ್ | 833 | 1698 | 2531 | 1937 | 594 | 251 | 343 |
| ಚಿಟಗುಪ್ಪ | 547 | 1421 | 1968 | 1488 | 480 | 247 | 233 |
| ಕಮಲನಗರ | 1080 | 1203 | 2283 | 1177 | 1106 | 821 | 285 |
| ಹುಲಸೂರ | 510 | 822 | 1332 | 982 | 350 | 168 | 182 |
| **ಒಟ್ಟು** | **14003** | **17173** | **31176** | **19707** | **11469** | **6853** | **4616** |

**ಭೂಮಾಪನ ಇಲಾಖೆಯಲ್ಲಿ ಬಾಕಿ ಇರುವ ಪ್ರಕರಣ ಹಂತವಾರು ವಿವರ**

| ತಾಲ್ಲೂಕು | ಪ್ರಾರಂಭಿಕ ತಪಾಸಣೆಗಾಗಿ ಕಛೇರಿಯಲ್ಲಿ | ಭೂಮಾಪಕರಿಗೆ ಹಂಚಿಕೆಗಾಗಿ | ಅಳತೆಗಾಗಿ ಭೂಮಾಪಕರ ಬಳಿ | ತಕರಾರು ಪ್ರಕರಣಗಳು | ಧಾಖಲೆ ಪುನರ್ ನಿರ್ಮಾಣಕ್ಕಾಗಿ | ಅಳತೆ ನಂತರ ಕಛೇರಿಯಲ್ಲಿ ಪರಿಶೀಲನೆ ಮತ್ತು ಅನುಮೋದನೆಗಾಗಿ | ಒಟ್ಟು ಭೂಮಾಪನ ಶಾಖೆಯಲ್ಲಿ ಬಾಕಿ |
|---|---|---|---|---|---|---|---|
| ಬಸವಕಲ್ಯಾಣ | 86 | 10 | 329 | 4 | 3 | 82 | 514 |
| ಭಾಲ್ಕಿ | 51 | 126 | 962 | 40 | 19 | 102 | 1300 |
| ಔರಾದ್ | 0 | 339 | 106 | 3 | 0 | 68 | 516 |
| ಬೀದರ್ | 127 | 143 | 670 | 105 | 7 | 191 | 1243 |
| ಹುಮ್ನಾಬಾದ್ | 40 | 89 | 165 | 13 | 0 | 36 | 343 |
| ಚಿಟಗುಪ್ಪ | 5 | 18 | 165 | 8 | 0 | 37 | 233 |
| ಕಮಲನಗರ | 39 | 117 | 76 | 2 | 0 | 51 | 285 |
| ಹುಲಸೂರ | 0 | 44 | 118 | 0 | 2 | 18 | 182 |
| **ಒಟ್ಟು** | **348** | **886** | **2591** | **175** | **31** | **585** | **4616** |

| | | |
|---|---|---|
| ಆ) | ಹಾಗಾದಲ್ಲಿ ಸರ್ವೇ ಕಾರ್ಯವು ವಿಳಂಬವಾಗಲು ಕಾರಣವೇನು; (ವಿವರ ನೀಡುವುದು) | **ಸರ್ವೇ ಕಾರ್ಯವು ವಿಳಂಬವಾಗಲು ಕಾರಣಗಳು:-**<br>ಯಾವುದೇ ಅಳತೆ ಕೋರಿ ಅರ್ಜಿ ಸ್ವೀಕೃವಾದಲ್ಲಿ, ಅಳತೆ ನೀಡುವ ಮೊದಲು ಜಮೀನಿನ ದಾಖಲೆಗಳನ್ನು ಪರಿಶೀಲಿಸಲಾಗುತ್ತದೆ, ಈ ವೇಳೆ<br>1) ಆಕಾರಬಂದು ಮತ್ತು ಪಹಣಿಗಳಲ್ಲಿ ದಾಖಲಾಗಿರುವ ವಿಸ್ತೀರ್ಣದಲ್ಲಿ ವ್ಯತ್ಯಾಸಗಳಿರುವುದು ಹಾಗೂ ಪಹಣಿ ಕಾಲಂ 3 ಮತ್ತು 9 ರಲ್ಲಿರುವ ವ್ಯತ್ಯಾಸಗಳಿರುವುದು.<br>2) ಪಹಣಿ ತಿದ್ದುಪಡಿ ಮಾಡಲು ಅವಶ್ಯಕವಾದ ಹಿಂದಿನ ಕಂದಾಯ ದಾಖಲೆಗಳು (ಮ್ಯುಟೇಷನ್, ಪಹಣಿ, ಮಂಜೂರಿ ಆದೇಶಗಳು-ಇತರೆ) ಲಭ್ಯವಾಗದಿರುವುದು.<br>3) ಮೂಲ ಭೂದಾಖಲೆಗಳು/ಕಂದಾಯ ದಾಖಲೆಗಳು ಶಿಥಿಲವಾಗಿರುವುದನ್ನು ಪುನರ್ ನಿರ್ಮಾಣ ಮಾಡಲು ಹೆಚ್ಚಿನ ಕಾಲಾವಲಾಶ ಬೇಕಾಗುವುದು<br>4) ಭೂಮಂಜೂರಾತಿ ಪ್ರಕರಣಗಳಲ್ಲಿ ಸರ್ಕಾರದ ಸೂಚನೆಗಳನ್ವಯ ನಮೂನೆ 1 ರಿಂದ 5 ಭರ್ತಿ ಮಾಡುವಲ್ಲಿ ಮಂಜೂರಾತಿ ದಾಖಲೆಗಳ ಸರಿಯಾಗಿ ಲಭ್ಯವಾಗದೇ ಇರುವುದು.<br>5) ಭೂಮಂಜೂರಾತಿ ಪ್ರಕರಣಗಳಲ್ಲಿ ಜಮೀನಿನ ಆಕಾರಬಂದಿನ ವಿಸ್ತೀರ್ಣಕ್ಕಿಂತ ಹೆಚ್ಚಿನ ಕ್ಷೇತ್ರಕ್ಕೆ ಮಂಜೂರಿ ಆದೇಶ ಮಾಡಿರುವುದರಿಂದ, ಮಂಜೂರಿ ಆದೇಶ ಮತ್ತು ಪಹಣಿ ಸರಿಪಡಿಸುವಲ್ಲಿ ತೊಂದರೆ ಇರುವುದು,<br>ಇತ್ಯಾದಿ ತಾಂತ್ರಿಕ ನ್ಯೂನ್ಯತೆಗಳನ್ನು ಸರಿಪಡಿಸುವಲ್ಲಿ ಹೆಚ್ಚಿನ ಕಾಲಾವಕಾಶ ಬೇಕಾಗುತ್ತದೆ. ಹಾಗೂ |
| ಇ) | ರೈತರಿಗೆ ಸರ್ವೆ ಕಾರ್ಯವನ್ನು ತುರ್ತಾಗಿ ಮಾಡಿಸಿ ಅನುಕೂಲ ಮಾಡಿಕೊಡಲು ಸರ್ಕಾರ ಕೈಗೊಂಡ ಕ್ರಮಗಳೇನು; ಯಾವ ಕಾಲಮಿತಿಯಲ್ಲಿ ಕ್ರಮ ಕೈಗೊಳ್ಳಲಾಗುವುದು?<br>(ಸಂಪೂರ್ಣ ವಿವರ ಒದಗಿಸುವುದು) | 6) ಅಳತೆ ವೇಳೆ ಅರ್ಜಿದಾರರ ಅನುಭವ ಮತ್ತು ಹಕ್ಕಿನ ಕ್ಷೇತ್ರದಲ್ಲಿ ವ್ಯತ್ಯಾಸವಿರುದರಿಂದ<br>7) ಜಮೀನಿನ ಭೂದಾಖಲೆ ಮತ್ತು ಅನುಭವದಲ್ಲಿ ತಾಳೆಯಿಲ್ಲದೆಯಿರುವುದರಿಂದ<br>8) ಅಳತೆ ವೇಳೆ ಗಡಿ ಮತ್ತು ಹಕ್ಕಿನ ಕುರಿತು ತಕಾರಾರು ಉದ್ಭವಿಸುವುದರಿಂದ<br>9) ಭೂಮಂಜೂರಾತಿ ಆದೇಶದಂತೆ ಸರ್ವೆ ನಂಬರು ಮತ್ತು ಅನುಭವದಂತೆ ಸರ್ವೆ ನಂಬರು ಬೇರೆ ಬೇರೆಯಾಗಿರುವುದು.<br>10) ಜಮೀನಿನ ಕುರಿತು ನ್ಯಾಯಾಲಯದಲ್ಲಿ ವಿವಾದಗಳಿರುವುದರಿಂದ.<br>ಇತ್ಯಾದಿ ಕಾರಣಗಳಿಂದ ಪ್ರಕರಣಗಳ ವಿಲೇವಾರಿಯಲ್ಲಿ ವಿಳಂಬವಾಗುತ್ತಿರುತ್ತದೆ. ಇಲಾಖೆಯಲ್ಲಿ ಅಳತೆ ಕೋರಿ ಸ್ವೀಕೃತವಾಗುವ ಎಲ್ಲಾ ಅರ್ಜಿಗಳನ್ನು ಮೋಜಿಣಿ ತಂತ್ರಾಂಶದ ಮುಖಾಂತರ ಆನ್‌ಲೈನ್‌ನಲ್ಲಿ ಸ್ವೀಕರಿಸಲಾಗುತ್ತಿದ್ದು. ತಂತ್ರಾಂಶದ ಪ್ರತಿ ಹಂತದಲ್ಲಿಯೂ FIFO (ಸರದಿ ಸಾಲಿನಂತೆ) ಅಳವಡಿಸಲಾಗಿದೆ. ಪ್ರಕರಣವು ಅಳತೆಗೆ ಯೋಗ್ಯವಾಗಿದ್ದಲ್ಲಿ FIFO (ಸರದಿ ಸಾಲಿನಂತೆ) ಅಳತೆಗಾಗಿ ಭೂಮಾಪಕರಿಗೆ ಆನ್‌ಲೈನ್‌ನಲ್ಲಿ ವಿತರಿಸಲಾಗುತ್ತಿದೆ. ಪ್ರಕರಣದಲ್ಲಿ ಅಳ್ತೆಯಾದ ನಂತರ ಭೂಮಾಪಕರು ಆನ್‌ಲೈನ್‌ನಲ್ಲಿ ಕಡತಗಳನ್ನು ಅಪ್‌ಲೋಡ್ ಮಾಡಲು ಹಾಗೂ ಅಪ್ಲೋಯಡ್ ಮಾಡಿರುವ ಕಡತಗಳ ಪರಿಶೀಲನೆ ಮತ್ತು ಅನುಮೋದನೆಯನ್ನು ಸಹ ಆನ್‌ಲೈನ್‌ನಲ್ಲೇ ನಿರ್ವಹಿಸಲಾಗುತ್ತಿದೆ. ತಂತ್ರಾಂಶದ ಮುಖಾಂತರ, ಪ್ರಕರಣಗಳ ಯಾವುದೇ ಹಂತದಲ್ಲಿ ವಿಳಂಬಕ್ಕೆ ಅವಕಾಶವಿಲ್ಲದಂತೆ ಕ್ರಮವಹಿಸಲಾಗುತ್ತಿದೆ.<br>ವಿಡಿಯೋ ಸಂವಾದ ಮತ್ತು ವಿಭಾಗವಾರು ಅಧಿಕಾರಿಗಳ ಸಭೆ ನಡೆಸಿ ಪ್ರಗತಿ ಪರಿಶೀಲನೆ ಮಾಡಿ ಹೆಚ್ಚಿನ ಪ್ರಗತಿ ಸಾಧಿಸಲು ಸೂಕ್ತ ಮಾರ್ಗದರ್ಶನ ಮತ್ತು ಸೂಚನೆ ನೀಡಲಾಗುತ್ತಿದೆ.<br>ಹೆಚ್ಚಿನ ಪ್ರಕರಣಗಳು ಬಾಕಿ ಇರುವ ತಾಲ್ಲೂಕುಗಳಿಗೆ ಕಡಿಮೆ ಪ್ರಕರಣಗಳು ಬಾಕಿ ಇರುವ ತಾಲ್ಲೂಕಿನಿಂದ ಭೂಮಾಪಕರನ್ನು ನಿಯೋಜನೆ ಮಾಡಿ ಪ್ರಕರಣಗಳನ್ನು ವಿಲೇಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದ್ದು. ಇದರಿಂದ ಪ್ರಕರಣಗಳ ಶೀಘ್ರ ವಿಲೇವಾರಿ ಮಾಡಲು ಸಾದ್ಯವಾಗುತ್ತಿದೆ.<br>ಇಲಾಖೆ ಸುತ್ತೋಲೆ ಸಂ.ತಾಂ.ಪ.ಭೂ.ಘಟಕ.52/2008-09 ದಿನಾಂಕ 16-4-2009 ರ ಪ್ರಕಾರ ತತ್ಕಾಲ್ ಪೋಡಿಗಾಗಿ ಸಲ್ಲಿಕೆಯಾಗುವ ಅರ್ಜಿಗಳು ನಿಯಮಾನುಸಾರ ಅಳತೆಗೆ ಯೋಗ್ಯವಿದ್ದಲ್ಲಿ ಅಂತಹ ಪ್ರಕರಣಗಳನ್ನು 30 ದಿನಗಳಲ್ಲಿ ಇತ್ಯರ್ಥಪಡಿಸಲು ಕಾಲಮಿತಿ ನಿಗಧಿಪಡಿಸಲಾಗಿದ್ದು ಬಾಕಿ ಪ್ರಕರಣಗಳನ್ನು ಸಹಾ ಆದ್ಯತೆಯ ಮೇರೆಗೆ ವಿಲೇವಾರಿ ಮಾಡಲಾಗುವುದು.<br>ಭೂಮಾಪಕರು/ಅಧಿಕಾರಿಗಳು ಪ್ರಕರಣಗಳಲ್ಲಿ ಅನಾವಶ್ಯಕವಾಗಿ ವಿಳಂಭ ಮಾಡುತ್ತಿರುವ ಬಗ್ಗೆ ಸಾರ್ವಜನಿಕರಿಂದ ನಿರ್ದಿಷ್ಟವಾದ ದೂರುಗಳು ಸ್ವೀಕೃತವಾದ ತಕ್ಷಣ ಸಂಬಂಧಿಸಿದ ಭೂದಾಖಲೆಗಳ ಜಂಟಿ ನಿರ್ದೇಶಕರು/ಭೂದಾಖಲೆಗಳ ಉಪ ನಿರ್ದೇಶಕರುಗಳಿಂದ ತನಿಖಾ ವರದಿ ಪಡೆದು, ಇಲಾಖಾ ವಿಚಾರಣೆಯನ್ನು ನಡೆಸಿ, ತಪ್ಪಿತಸ್ಥ ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲಾಗುತ್ತಿದೆ. |

**ಸಂಖ್ಯೆ: ಕಂಇ 20 ಎಸ್‌ಎಸ್‌ಸಿ 2020**

(ಆರ್. ಅಶೋಕ)
ಕಂದಾಯ ಸಚಿವರು